**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 224 ಎಸ್ಎಎಸ್ 2002 (1) ದಿನಾಂಕ: 3.8.2002.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸಸಿವಿ 2003 ದಿನಾಂಕ: 21.7.2003.
3. ಮಹಾಲೇಖಪಾಲರು (ಲೆಕ್ಕಪತ್ರ) ಬೆಂಗಳೂರು ಇವರ ಪತ್ರ ಸಂಖ್ಯೆ ಜಿಎಂ:ಐಎಎಸ್-1:2004-05:483, ದಿನಾಂಕ:12.5.2004.
4. ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಗ್ರಾಅಪ 24 ಕಾ 2003, ದಿನಾಂಕ: 16.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 3.8.2002ರ ಸರ್ಕಾರದ ಆದೇಶದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಮ್ನೀಕರಿಸಿ ಕಾರ್ಯದರ್ಶಿ (ಪಂಚಾಯತ್ ರಾಜ್) ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದ್ದು, ನಂತರ ಈ ಹುದ್ದೆಯನ್ನು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 21.7.2003ರ ಸರ್ಕಾರದ ಆದೇಶದಲ್ಲಿ ದಿನಾಂಕ: 8.7.2003 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ. ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ: 7.7.2004ಕ್ಕೆ ಮುಕ್ತಾಯಗೊಳ್ಳಲಿದೆ.

ಮಹಾಲೇಖಪಾಲರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 12.5.2004ರ ಪತ್ರದಲ್ಲಿ ಸದರಿ ಹುದ್ದೆಯನ್ನು ಮುಂದುವರೆಸಿರುವ ಬಗ್ಗೆ ಹೊರಡಿಸಲಾದ ಆದೇಶದ ಪ್ರತಿಯನ್ನು ಕಳುಹಿಸಿ ಕೊಡುವಂತೆ ಕೋರಿರುತ್ತಾರೆ. ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯದರ್ಶಿ (ಪಂಚಾಯತ್ ರಾಜ್) ಇವರು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 16.6.2004ರ ಟಿಪ್ಪಣಿಯಲ್ಲಿ ಹುದ್ದೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 2004, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 8.7.2004 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | |
|---|---|
| 1. ಶೀಘ್ರಲಿಪಿಗಾರ | 1 ಹುದ್ದೆ |
| 2. ಕಿರಿಯ ಸಹಾಯಕ | 1 ಹುದ್ದೆ |
| 3. ವಾಹನ ಚಾಲಕ | 1 ಹುದ್ದೆ |
| 4. ದಲಾಯತ್ | 2 ಹುದ್ದೆಗಳು |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 874

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

**ವಿಷಯ:** ಶ್ರೀ ಬಿ. ಶ್ರೀನಿವಾಸನಾಯಕ್, ನಿವೃತ್ತ ಶಾಖಾಧಿಕಾರಿ, ಇವರಿಗೆ ಅಧೀನ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯ ಉಚ್ಚ ನ್ಯಾಯಾಲಯವು ಅರ್ಜಿ ಸಂಖ್ಯೆ: 26747/2003 ರಲ್ಲಿ ದಿನಾಂಕ: 9.3.2004 ರಂದು ತೀರ್ಪು ನೀಡಿ ರಾಜ್ಯ ಸರ್ಕಾರದ ಅರ್ಜಿಯನ್ನು ವಜಾ ಮಾಡಿರುತ್ತದೆ. ಹಾಗೂ ಪ್ರತಿವಾದಿಯಾದ ಶ್ರೀ ಬಿ. ಶ್ರೀನಿವಾಸನಾಯಕ್, ಇವರಿಗೆ ರೂ.5000-00 ಗಳ ವೆಚ್ಚವನ್ನು ಹಿಂಬರಿಸಲು ಆದೇಶಿಸಿರುತ್ತದೆ. ಸಿ.ಆ.ಸು.ಇಲಾಖೆಯ ಕಾನೂನು ಕೋಶವು ಅಧಿಕೃತ ಜ್ಞಾಪನ ಸಂಖ್ಯೆ: DPAR 194 LC 2002 ದಿನಾಂಕ: 4.8.2004 ರಲ್ಲಿ ಈ ಪ್ರಕರಣವು ಮೇಲ್ಮನವಿಗೆ ಅರ್ಹವಲ್ಲ ಎಂದು ತೀರ್ಮಾನಿಸಿರುತ್ತದೆ. ಇದೇ ಕ್ರಮ ಸಂಖ್ಯೆ ದಿನಾಂಕ: 5.8.2004ರ ಅಧಿಸೂಚನೆಯಲ್ಲಿ ಶ್ರೀ ಬಿ. ಶ್ರೀನಿವಾಸನಾಯಕ್, ಇವರಿಗೆ ದಿನಾಂಕ: 27.11.94 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಧೀನ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಲಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಶ್ರೀ ಬಿ. ಶ್ರೀನಿವಾಸನಾಯಕ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರಿಗೆ ಉಚ್ಚ ನ್ಯಾಯಾಲಯವು ಅರ್ಜಿ ಸಂಖ್ಯೆ:26747/2003 ರಲ್ಲಿ ನೀಡಿದ ತೀರ್ಪಿನ ಅನ್ವಯ ರೂ.5000-00 ಗಳ ವೆಚ್ಚವನ್ನು ಹಿಂಬರಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 172 ಸಆಸೇ 2002, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2004**

ಕರ್ನಾಟಕ ಉಚ್ಚ ನ್ಯಾಯಾಲಯವು ಅರ್ಜಿ ಸಂಖ್ಯೆ:26747/2003 ರಲ್ಲಿ ದಿನಾಂಕ: 9.3.2004 ರಂದು ನೀಡಿದ ತೀರ್ಪಿನ ಅನ್ವಯ ಶ್ರೀ ಬಿ. ಶ್ರೀನಿವಾಸನಾಯಕ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರಿಗೆ ನ್ಯಾಯಾಲಯದ ವೆಚ್ಚವಾಗಿ ರೂ.5000-00 (ರೂ.ಐದು ಸಾವಿರಗಳು) ಗಳನ್ನು ಈ ಮೂಲಕ ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052-00-090-0-01-051-ಕರ್ನಾಟಕ ಸರ್ಕಾರ ಸಚಿವಾಲಯ - ಸಾಮಾನ್ಯ ವೆಚ್ಚಗಳು ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ನೀಡಿದ ಅಧಿಕಾರ ಪ್ರತ್ಯಾಯೋಜನೆ ಅಡಿ ಹೊರಡಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 875 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

## ಆರ್ಥಿಕ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಆಇ 2 ಬಿಇಎಂ 2003, ಬೆಂಗಳೂರು, ದಿನಾಂಕ: 20ನೇ ಜುಲೈ 2004**

**ವಿಷಯ:** ಸರ್ಕಾರದ ವೆಚ್ಚಗಳಲ್ಲಿ ಮಿತವ್ಯಯ ಕ್ರಮಗಳು.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ ಆಇ 2 ಬಿಇಎಂ 2003, ದಿನಾಂಕ: 5.7.2004.

ಉಲ್ಲೇಖಿತ ದಿನಾಂಕ 5.7.2004ರ ಸರ್ಕಾರದ ಆದೇಶದ ಕ್ರಮ ಸಂಖ್ಯೆ (ಉ) ದಲ್ಲಿ "ಪೆಟ್ರೋಲ್, ತೈಲ, ಲೂಬ್ರಿಕೆಂಟ್ಸ್ ಹಾಗೂ ಲೇಖನ ಸಾಮಗ್ರಿಗಳಿಗೆ ಆಯವ್ಯಯದಲ್ಲಿ ಅವಕಾಶ ಮಾಡಿದ್ದಲ್ಲಿ ವೆಚ್ಚ ಮಾಡಬಹುದಾಗಿದೆ" ಎಂಬುದನ್ನು "ಪೆಟ್ರೋಲ್, ತೈಲ, ಲೂಬ್ರಿಕೆಂಟ್ಸ್, ದೂರವಾಣಿ ಹಾಗೂ ಲೇಖನ ಸಾಮಗ್ರಿಗಳಿಗೆ ಆಯವ್ಯಯದಲ್ಲಿ ಅವಕಾಶ ಮಾಡಿದ್ದಲ್ಲಿ ವೆಚ್ಚ ಮಾಡಬಹುದಾಗಿದೆ" ಎಂದು ಓದಿಕೊಳ್ಳುವುದು.

**ಟಿ.ಪಿ. ನರಸಿಂಗರಾವ್**

ಪಿ.ಆರ್. 877 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣಾ ಮತ್ತು ಗಣಕ ಕೋಶ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯಃ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಹಿನ್ನೆಲೆಯಲ್ಲಿ ಆಯ್ಕೆಯಾದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಸೇವೆಯಿಂದ ತೆಗೆದು ಹಾಕುವ ಬಗ್ಗೆ.

ಓದಲಾಗಿದೆಃ
1. ಸರ್ಕಾರಿ ಆದೇಶ ಸಂಖ್ಯೆಃ ಆಕುಕ 716 ಹೆಚ್‌ಎಸ್‌ಹೆಚ್ 1999 ದಿನಾಂಕಃ 20–6–2000
2. ಸರ್ಕಾರಿ ಸುತ್ತೋಲೆ ಸಂಖ್ಯೆಃ ಸಿಆಸುಇ 45 ಸೇನನಿ 2003 ದಿನಾಂಕಃ 2–7–2003
3. ಸರ್ಕಾರಿ ಅಧಿಸೂಚನೆ ಸಂಖ್ಯೆಃ ಸಿಆಸುಇ 58 ಎಸ್‌ಆರ್‌ಆರ್ 2003 ದಿನಾಂಕಃ 12–11–2003
4. ಇಲಾಖಾ ನೇಮಕಾತಿ ಸಮಿತಿ, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆಃ ಡಿಆರ್‌ಸಿ 42 (1) 2003–04 ದಿನಾಂಕಃ 12–12–03
5. ಆಯುಕ್ತರು, ಆಕುಕ ಸೇವೆಗಳು, ಇವರ ಪತ್ರ ಸಂಖ್ಯೆಃ ಜೆಆರ್‌ಒ(4) 147/02–03 ದಿನಾಂಕಃ 31–3–2004

ಪ್ರಸ್ತಾವನೆಃ

ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿಗಳಿಗೆ ಶೇಕಡಾ ಹತ್ತರಷ್ಟು ಕೃಪಾಂಕ ನೀಡಲು ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 3 (ಬಿ) ರಲ್ಲಿ ಅವಕಾಶ ಕಲ್ಪಿಸಲಾಗಿತ್ತು, ಈ ನಿಯಮದಡಿಯಲ್ಲಿ ಕ್ರಮಾಂಕ (1) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಇತರರೊಂದಿಗೆ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಯಲ್ಲಿ ನೇಮಕಾತಿ ಮಾಡಲಾಗಿತ್ತು, ನಿಯಮ 3 (ಬಿ) ಯನ್ನು ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ಈ ನ್ಯಾಯಾಲಯಗಳು ನೀಡಿರುವ ತೀರ್ಪುಗಳ ಹಿನ್ನೆಲೆಯಲ್ಲಿ ಸರ್ಕಾರವು ಉಲ್ಲೇಖ (2) ರಲ್ಲಿ ಓದಲಾದ ದಿನಾಂಕಃ 2.7.2003 ರಂದು ಹೊರಡಿಸಲಾದ ಸುತ್ತೋಲೆಯಲ್ಲಿ ಈ ಕೆಳಕಂಡಂತೆ ಕ್ರಮ ಜರುಗಿಸಲು ಸೂಚಿಸಿತ್ತು,

ಎ) ದಿನಾಂಕಃ 11.11.1998 ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ (appointment) ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಆಯ್ಕೆ ಪಟ್ಟಿಗಳನ್ನು ಗ್ರಾಮೀಣ ಕೃಪಾಂಕ ರಹಿತವಾಗಿ ಪರಿಷ್ಕರಿಸಿ, ಪರಿಷ್ಕೃತ ಆಯ್ಕೆ ಪಟ್ಟಿಗಳನ್ನು ಪ್ರಕಟಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು;

ಬಿ) ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯಲಾದ ಅಬ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಸಿ) ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಹೊಸದಾಗಿ ಸೇರ್ಪಡೆಯಾದ ಅಭ್ಯರ್ಥಿಗಳನ್ನು ಸೇವೆಯಿಂದ ತೆಗೆದುಹಾಕಿದ ಅಭ್ಯರ್ಥಿಗಳ ಸ್ಥಾನದಲ್ಲಿ ಭವಿಷ್ಯವರ್ತಿಯಾಗಿ ಜಾರಿಗೆ ಬರುವಂತೆ ನೇಮಕಾತಿ ಮಾಡಲು ಕ್ರಮ ತೆಗೆದುಕೊಳ್ಳತಕ್ಕದ್ದು. ಮೇಲಿನ ಸೂಚನೆ 'ಎ' ರಂತೆ ದಿನಾಂಕಃ11.11.98 ರ ನಂತರ ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ, ಸೂಚನೆ 'ಬಿ' ರಂತೆ ಮೇಲೆ ಓದಲಾದ ಕ್ರಮಾಂಕ (4) ರಲ್ಲಿ ಆಯ್ಕೆ

ಪ್ರಾಧಿಕಾರವು 184 ಅಭ್ಯರ್ಥಿಗಳನ್ನು ಆಯ್ಕೆಪಟ್ಟಿಯಿಂದ ತೆಗೆದುಹಾಕಲಾಗಿದೆ. ಸೂಚನೆ 'ಸಿ' ರಂತೆ ತೆಗೆದುಹಾಕಲಾಗಿರುವ 184 ಅಭ್ಯರ್ಥಿಗಳ ಸ್ಥಾನದಲ್ಲಿ ಹೊಸದಾಗಿ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ಹೊರಡಿಸುವ ಪ್ರಕ್ರಿಯೆ ಜಾರಿಯಲ್ಲಿದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾಗಿರುವ ಅಧಿಸೂಚನೆಯಂತೆ ಗ್ರಾಮೀಣ ಕೃಪಾಂಕದಲ್ಲಿ ನೇಮಕಾತಿ ಹೊಂದಿರುವ ವೈದ್ಯರುಗಳ ಪೈಕಿ ಇನ್ನಿಬ್ಬರು ವೈದ್ಯರುಗಳನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಮೇಲೆ (5) ರಲ್ಲಿ ಓದಲಾದ ಆಯುಕ್ತರ ಪ್ರಸ್ತಾವನೆಯಂತೆ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ತೀರ್ಮಾನಿಸಿ, ಈ ಕೆಳಕಂಡ ಆದೇಶ.

ಸರ್ಕಾರಿ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 (ಭಾಗ) ಬೆಂಗಳೂರು ದಿನಾಂಕ: 4ನೇ ಆಗಸ್ಟ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಗ್ರಾಮೀಣ ಕೃಪಾಂಕದಡಿಯಲ್ಲಿ ಆಯ್ಕೆಯಾಗಿ ನೇಮಕಾತಿ ಹೊಂದಿದ ಈ ಕೆಳಕಂಡ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದು ಹಾಕಲಾಗಿದೆ.

(1) ಡಾ: ಸಂತೋಷ್‌ಪ್ರಭಾ,
ಪ್ರಾಥಮಿಕ ಆರೋಗ್ಯ ಕೇಂದ್ರ, ಹಳ್ಳಿಖೇಡ್(ಬಿ),
ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ,

(2) ಡಾ: ಅಶೋಕ ಸಿ.ಮೈಲಾರ
ಪ್ರಾಥಮಿಕ ಆರೋಗ್ಯ ಕೇಂದ್ರ, ವರವಟ್ಟಿ
ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಕಾಶೀನಾಥ ಪಟವಾಡಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 878

## ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ನಗರ ಸ್ತ್ರೀಶಕ್ತಿ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ರಾಜ್ಯಮಟ್ಟದ, ಜಿಲ್ಲಾಮಟ್ಟದ ಹಾಗೂ ತಾಲ್ಲೂಕುಮಟ್ಟದ ಚಾಲನಾ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮಮಇ/141/ಮಮಅ/2000, ಬೆಂಗಳೂರು, ದಿನಾಂಕ:25-8-2000.
2. ಸರ್ಕಾರಿ ಆದೇಶ ಸಂಖ್ಯೆ: ಮಮಇ/19/ಮಅನಿ/2003, ದಿನಾಂಕ:25-11-2003.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪತ್ರಸಂಖ್ಯೆ/ಮಅನಿ/ನಸ್ತ್ರೀಯೋ/06/2003-04/654. ದಿ.19-05-2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮಹಿಳೆಯರನ್ನು ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿ ಗ್ರಾಮೀಣ ಮಹಿಳೆಯರನ್ನು ಸಶಕ್ತಗೊಳಿಸಲು 2000-01ನೇ ಸಾಲಿನಲ್ಲಿ ರಾಜ್ಯ ವಲಯ ಯೋಜನೆಯಡಿ ಸ್ತ್ರೀಶಕ್ತಿ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದನ್ನು ಪರಿಶೀಲಿಸಲು ರಾಜ್ಯ ಮಟ್ಟದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಹಾಗೂ ತಾಲ್ಲೂಕ್ ಮಟ್ಟದಲ್ಲಿ ಕಾರ್ಯನಿರ್ವಾಹಣಾಧಿಕಾರಿ, ತಾಲ್ಲೂಕ್ ಪಂಚಾಯತ್ ಇವರ ಅಧ್ಯಕ್ಷತೆಯಲ್ಲಿ ಮೂರು ಚಾಲನಾ ಸಮಿತಿಗಳನ್ನು ರಚಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ರಾಜ್ಯದ ನಗರ ಮತ್ತು ಪಟ್ಟಣ ಪ್ರದೇಶದ ಅಂಗವಿಕಲ ಮಹಿಳೆಯರು, ಪಟ್ಟಣ ಮತ್ತು ನಗರ ಪ್ರದೇಶದಲ್ಲಿ ಸಣ್ಣವ್ಯಾಪಾರ ಮಾಡುತ್ತಿರುವ ಮಹಿಳೆಯರನ್ನೊಳಗೊಂಡ ಒಟ್ಟು 5,000 ನಗರ ಸ್ತ್ರೀಶಕ್ತಿ ಗುಂಪುಗಳನ್ನು ರಚಿಸಿ ಸದರಿ ನಗರ ಸ್ತ್ರೀಶಕ್ತಿ ಗುಂಪುಗಳಿಗೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಸುತ್ತುನಿಧಿಯನ್ನು ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ನಗರ ಸ್ತ್ರೀಶಕ್ತಿ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಸಂಬಂಧಿಸಿದಂತೆ ರಾಜ್ಯ ಮಟ್ಟದ ಜಿಲ್ಲಾ ಮಟ್ಟದ ತಾಲ್ಲೂಕು ಮಟ್ಟದ ಚಾಲನಾ ಸಮಿತಿಗಳನ್ನು ರಚಿಸಿ ಸರ್ಕಾರ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈಗಾಗಲೇ ಗ್ರಾಮೀಣ ಸ್ತ್ರೀಶಕ್ತಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಆದೇಶದ ರೀತ್ಯಾ ರಾಜ್ಯ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಚಾಲನಾ ಸಮಿತಿಗಳನ್ನು ರಚಿಸಿರುವುದರಿಂದ ನಗರ ಸ್ತ್ರೀಶಕ್ತಿ ಯೋಜನೆ ಅನುಷ್ಠಾನಕ್ಕೆ ಪ್ರತ್ಯೇಕ ಚಾಲನೆ ಸಮಿತಿ ರಚನೆ ಅಗತ್ಯವಿಲ್ಲದ್ದರಿಂದ ಸದರಿ ನಗರ ಸ್ತ್ರೀಶಕ್ತಿಯೋಜನೆಯನ್ನು ಸಹ ಈ ಚಾಲನಾ ಸಮಿತಿಯ ವ್ಯಾಪ್ತಿಯೊಳಗೆ ತರುವುದು. ಅಗತ್ಯವೆಂದು ಮನಗಂಡು ಸರ್ಕಾರವು ಕೆಳಗಿನ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಮಮಅ/54/ಮಅನಿ/2004, ಬೆಂಗಳೂರು, ದಿನಾಂಕ: 19ನೇ ಜುಲೈ 2004**

ಗ್ರಾಮೀಣ ಪ್ರದೇಶದ ಸ್ತ್ರೀಶಕ್ತಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಜ್ಯ ಮಟ್ಟದಲ್ಲಿ ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ 3 ಚಾಲನಾ ಸಮಿತಿಗಳನ್ನು ರಚಿಸಲಾಗಿದ್ದು, ನಗರ ಸ್ತ್ರೀಶಕ್ತಿ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಈ ಯೋಜನೆಯನ್ನು ಸಹಾ ದಿನಾಂಕ: 23.8.2000ರ ಆದೇಶದ ರೀತ್ಯಾ ರಚಿಸಲಾದ ಈ ಚಾಲನಾ ಸಮಿತಿಗಳ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 879

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯಃ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಅಡಿಯಲ್ಲಿ ಆಯ್ಕೆಗೊಂಡು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳುವ ಬಗ್ಗೆ.

ಓದಲಾಗಿದೆಃ ಸರ್ಕಾರದ ಆದೇಶ ಸಂಖ್ಯೆಃ ಆಕುಕ 939 ಹೆಚ್ಎಸ್ಹೆಚ್ 2003, (ಭಾಗ) ದಿನಾಂಕಃ 04.08.2004.

ಪ್ರಸ್ತಾವನೆಃ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗ್ರಾಮೀಣ ಕೃಪಾಂಕದ ಆಧಾರದ ಮೇಲೆ ನೇಮಕಾತಿಗೊಂಡು ಸೇವೆ ಸಲ್ಲಿಸಿದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಮೇಲೆ ಓದಲಾದ ದಿನಾಂಕಃ 04.08.2004 ರ ಆದೇಶದನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದ್ದು, ಈ ರೀತಿ ವೈದ್ಯಾಧಿಕಾರಿಗಳನ್ನು ಸೇವೆಯಿಂದ ತೆಗೆದು ಹಾಕಿರುವುದರಿಂದ ಗ್ರಾಮೀಣ ಪ್ರದೇಶದಲ್ಲಿನ ಸಾರ್ವಜನಿಕರು ವೈದ್ಯಕೀಯ ಸೌಲಭ್ಯದಿಂದ ವಂಚಿತರಾಗುವುದನ್ನು ಸರ್ಕಾರವು ಮನಗಂಡು ಮೇಲಿನ ಆದೇಶದಲ್ಲಿ ಸೇವೆಯಿಂದ ತೆಗೆದುಹಾಕಿರುವ ವೈದ್ಯಾಧಿಕಾರಿಗಳನ್ನು ಮುಂದಿನ ಆದೇಶದವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

ಸರ್ಕಾರಿ ಆದೇಶ ಸಂಖ್ಯೆಃ ಆಕುಕ 939 ಹೆಚ್ಎಸ್ಹೆಚ್ 2003 (ಭಾಗ) ಬೆಂಗಳೂರು ದಿನಾಂಕಃ **4ನೇ ಆಗಸ್ಟ್** 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆಃ ಆಕುಕ 939 ಹೆಚ್ಎಸ್ಹೆಚ್ 2003 (ಭಾಗ) ದಿನಾಂಕಃ 04.08.2004 ರನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಲ್ಪಟ್ಟ ಈ ಕೆಳಕಂಡ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಅವರುಗಳು ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳಗಳಲ್ಲಿಯೇ ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ.7,400–00 ಗಳ ಸಂಭಾವನೆಯ ಆಧಾರದ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೆ ನೇಮಕ ಮಾಡಿಕೊಳ್ಳಲಾಗಿದೆ.

(1) ಡಾಃ ಸಂತೋಷ್‌ಪ್ರಭಾ,
ಪ್ರಾಥಮಿಕ ಆರೋಗ್ಯ ಕೇಂದ್ರ, ಹಳ್ಳಿಖೇಡ್(ಬಿ),
ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ.

(2) ಡಾಃ ಅಶೋಕ ಸಿ.ಮೈಲಾರ
ಪ್ರಾಥಮಿಕ ಆರೋಗ್ಯ ಕೇಂದ್ರ, ವರವಟ್ಟಿ
ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ.

ಸರ್ಕಾರಿ ಆದೇಶಗಳು ಸಂಖ್ಯೆಃ ಆಕುಕ 125 ಹೆಚ್ಎಸ್ಹೆಚ್ 92, ದಿನಾಂಕಃ 15.10.92 ಹಾಗೂ ಆಕುಕ 317 ಹೆಚ್ಎಸ್ಹೆಚ್ 99, ದಿನಾಂಕಃ 1.8.2001 ರಲ್ಲಿ ಗುತ್ತಿಗೆ ಆಧಾರದ ಮೇಲೆ ವೈದ್ಯಾಧಿಕಾರಿಗಳ ನೇಮಕಾತಿಗೆ ಸಂಬಂಧಿಸಿದಂತೆ ಹೊರಡಿಸಲಾಗಿರುವ ನಿಬಂಧನೆ ಮತ್ತು ಷರತ್ತುಗಳು ಹಾಗೂ ವೇತನ ವಿತರಣೆ ಃ ಸೌಲಭ್ಯಗಳನ್ನು ಪ್ರಸ್ತುತ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಅಭ್ಯರ್ಥಿಗಳಿಗೂ ಅನ್ವಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಕಾಶೀನಾಥ ಪಟವಾಡಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 880

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** **ಗಡಿನಾಡ ಆಯೋಗದ "ಗಡಿನಾಡ ಅಧ್ಯಯನ" ವರದಿಯ ಅನುಷ್ಠಾನದ - ಸಮಿತಿ ರಚನೆ ಕುರಿತು.**

**ಓದಲಾಗಿದೆ:**

1. ಅಧ್ಯಕ್ಷರು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು ರವರ ಅರೆ ಸರ್ಕಾರಿ ಪತ್ರ ಕಅಪ್ರ:ಅ 229/2003 ದಿನಾಂಕ:3.11.2003.
2. ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂ.ಯೋಇ 486 ಯೋವಿಪಿ 2002 ದಿನಾಂಕ:22.12.2003.
3. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು ರವರ ಪತ್ರಸಂಖ್ಯೆ:.ಕಅಪ್ರ/ಕ/52/2001 ದಿನಾಂಕ: 21.6.2004.

**ಪ್ರಸ್ತಾವನೆ:**

2002–03ನೇ ಆಯವ್ಯಯದ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿದಂತೆ ದಿನಾಂಕ:17.5.2002 ಆದೇಶದಲ್ಲಿ ಗಡಿನಾಡು ಅಧ್ಯಯನ ವರದಿಯನ್ನು ಅನುಷ್ಠಾನಗೊಳಿಸುವ ಮೇಲುಸ್ತುವಾರಿಯನ್ನು ಅಧ್ಯಕ್ಷರು ಕನ್ನಡ ಅಭಿವೃದ್ಧಿಪ್ರಾಧಿಕಾರ, ಬೆಂಗಳೂರು, ಇವರಿಗೆ ವಹಿಸಲಾಗಿದೆ. ಆದರೆ ಸರ್ಕಾರದ ಮಟ್ಟದಲ್ಲಿ ಈ ವರದಿಯನ್ನು ಪರಿಶೀಲಿಸಿ ಅದರಲ್ಲಿ ಜಾರಿಗೊಳಿಸಬಹುದಾದ ಅಂಶವನ್ನು ಗುರುತಿಸಿರುವುದಿಲ್ಲ. ಅಧ್ಯಯನ ವರದಿಯಲ್ಲಿ ಕಂಡುಬಂದಂತೆ ವರದಿಯಲ್ಲಿ ರಾಜ್ಯದ ಗಡಿಯಲ್ಲಿರುವ 52 ಗಡಿ ತಾಲ್ಲೂಕುಗಳಿಗೆ ಮಾತ್ರವಲ್ಲದೆ ಹೊರರಾಜ್ಯದಲ್ಲಿರುವ ಕನ್ನಡ ಪರಿಸರ ಹೊಂದಿರುವ ಭಾಗಗಳ ಬಗ್ಗೆ ಕೂಡ ಶಿಫಾರಸ್ಸುಗಳನ್ನು ಮಾಡಲಾಗಿರುತ್ತದೆ. ವರದಿಯಲ್ಲಿರುವ ಅಂಶಗಳು ಸರ್ಕಾರದ ಅನೇಕ ಇಲಾಖೆಗಳ ಕಾರ್ಯವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ಶಿಫಾರಸ್ಸುಗಳನ್ನು ಸಚಿವ ಸಂಪುಟದ ಅನುಮೋದನೆಗೆ ಸಲ್ಲಿಸುವ ಮೊದಲು, ಅಧಿಕಾರ ಮಟ್ಟದ ಸಮಿತಿಯ ಮುಂದೆ ತಂದು, ಸಮಿತಿಯು ಗುರುತಿಸುವ ಅಂಶಗಳನ್ನು ಜಾರಿಗೊಳಿಸುವುದು ಸೂಕ್ತವೆಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಗಳು ತಿಳಿಸಿರುತ್ತಾರೆ. ಈ ಬಗ್ಗೆ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಹಾಗೂ ಗಡಿ ನಾಡು ವರದಿಯ ಶಿಫಾರಸ್ಸುಗಳಿಗೆ ಒಳಪಡುವ ಇಲಾಖೆಗಳ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಗಳನ್ನು ಸದಸ್ಯರನ್ನಾಗಿ ಮಾಡಿ ಒಂದು ಸಮಿತಿಯನ್ನು ರಚಿಸಿ, ಶಿಫಾರಸ್ಸುಗಳ ಸಾಧಕ ಬಾಧಕಗಳನ್ನು ಪರಿಶೀಲಿಸಿದ ನಂತರ, ಸಚಿವ ಸಂಪುಟದ ಅನುಮೋದನೆಗೆ ಸಲ್ಲಿಸಬಹುದಾಗಿದೆ. ಈ ನಿಟ್ಟಿನಲ್ಲಿ ಕೆಳಕಂಡವರನ್ನೊಳಗೊಂಡಂತೆ ಸಮಿತಿಯನ್ನು ರಚಿಸಬೇಕಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 63 ಕೆಓಎಲ್ 2003, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ, ಸರ್ಕಾರದ ಮಟ್ಟದಲ್ಲಿ ಗಡಿನಾಡ ಅಧ್ಯಯನ ವರದಿಯ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ಹಾಗೂ ಅದರಲ್ಲಿ ಜಾರಿಗೊಳಿಸಬಹುದಾದ ಅಂಶಗಳನ್ನು ಗುರುತಿಸಲು ಅಪರ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಹಾಗೂ ಗಡಿನಾಡು ವರದಿಯ ಶಿಫಾರಸ್ಸುಗಳಿಗೆ ಒಳಪಡುವ ಇಲಾಖೆಗಳ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಗಳನ್ನು ಸದಸ್ಯರನ್ನಾಗಿ ಮಾಡಿ ಈ ಕೆಳಕಂಡಂತೆ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ಶಿಫಾರಸ್ಸುಗಳ ಸಾಧಕ ಬಾಧಕಗಳನ್ನು ಪರಿಶೀಲಿಸಿದ ನಂತರ ಸಚಿವ ಸಂಪುಟದ ಅನುಮೋದನೆಗೆ ಸಲ್ಲಿಸಬಹುದಾಗಿದೆ.

| | |
|---|---|
| 1] ಅಪರ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2] ಸರ್ಕಾರದ ಪ್ರಧಾನ ಕಾರ್ಯದರ್ಶಿ ಯೋಜನಾ ಇಲಾಖೆ | ಸದಸ್ಯರು |
| 3] ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ. | ಸದಸ್ಯರು |
| 4] ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ. | ಸದಸ್ಯರು |
| 5] ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | ಸದಸ್ಯರು |
| 6] ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ) | ಸದಸ್ಯರು |
| 7] ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 8] ಸರ್ಕಾರದ ಕಾರ್ಯದರ್ಶಿ–1, ಗ್ರಾಮೀಣ ಅಭಿವೃದ್ಧಿ ಮತ್ತುಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 9] ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ) | ಸದಸ್ಯರು |
| 10] ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಸದಸ್ಯರು |
| 11] ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ. | ಸದಸ್ಯರು |
| 12] ಸರ್ಕಾರದ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ | ಸದಸ್ಯರು |
| 13] ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ,ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು ಗಡಿನಾಡ ಅಧ್ಯಯನ ವರದಿಯನ್ನು 3 ತಿಂಗಳೊಳಗೆ ಪರಿಶೀಲಿಸಿ ತನ್ನ ವರದಿಯನ್ನು ಸಲ್ಲಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 881

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಬದರಿನಾಥ್, ಹಿಂದಿನ ತಹಶೀಲ್ದಾರ್, ಮಳವಳ್ಳಿ ತಾಲ್ಲೂಕು ಇವರ ಅಮಾನತ್ತಿನ ಅವಧಿಯ ಜೀವನಾಧಾರ ಭತ್ಯೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 46 ಎಡಿಇ 2001, ದಿನಾಂಕ: 18.9.2002.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 46 ಎಡಿಇ 2001, ದಿನಾಂಕ: 04.9.2003.

**ಪ್ರಸ್ತಾವನೆ:**

ಶ್ರೀ ಬದರಿನಾಥ್, ಇವರು ಈ ಹಿಂದೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕು ತಹಶೀಲ್ದಾರ್‌ರಾಗಿ ಹಾಗೂ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕುಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿರುವ ಗಂಭೀರವಾದ ಲೋಪಗಳ ಬಗ್ಗೆ ಸರ್ಕಾರವು ಪರಿಶೀಲಿಸಿ ಆರೋಪಿತ ಅಧಿಕಾರಿಯವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅವರನ್ನು ಈ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ನಂತರ, ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಸದರಿ ತಹಶೀಲ್ದಾರ್‌ರ ಅಮಾನತ್ತು ಆದೇಶವನ್ನು ತೆರವುಗೊಳಿಸಲಾಗಿದೆ. ಅಮಾನತ್ತಿನ ಅವಧಿಯು 6 ತಿಂಗಳಿಗೂ ಮೀರಿರುವುದರಿಂದ, ಈ ಮುಂದುವರೆದ ಅಮಾನತ್ತಿನ ಅವಧಿಗೆ ಶೇ. 75 ರಷ್ಟು ಜೀವನಾಧಾರ ಭತ್ಯೆ ನೀಡಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 46 ಎಡಿಇ 2001, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98(1) (i)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬದರಿನಾಥ್, ತಹಶೀಲ್ದಾರ್ ಇವರ ದಿನಾಂಕ: 18.3.2003ರಿಂದ 4.9.2003ರ ಅಮಾನತ್ತಿನ ಅವಧಿಗೆ ಶೇ.75 ರಂತೆ ಜೀವನಾಧಾರ ಭತ್ಯೆ ನೀಡಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 882

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ಕಾನೂನು ಸಚಿವಾಲಯ**

**ವಿಷಯ:** 2004-05ನೇ ಸಾಲಿಗೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 24.06.2004ರ ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ, ಬೆಂಗಳೂರು ಇ ವರ ಪತ್ರ ಸಂಖ್ಯೆ: ಕರಾಕಾಸೇಪ್ರಾ: ಅಕೌಂಟ್ಸ್:87:2003-04: 2004-05.

**ಪ್ರಸ್ತಾವನೆ:**

2004-05ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಉಚಿತ ಕಾನೂನು ನೆರವು, ಕಾನೂನು ಸಾಕ್ಷರತಾ ಅಂದೋಳನ ಕಾರ್ಯಕ್ರಮ, ಕಾನೂನು ಶಿಬಿರದ ಮೂಲಕ ಉಚಿತ ಕಾನೂನು ಸಲಹೆ ನೀಡುವುದು ಹಾಗೂ ಜನತಾ ನ್ಯಾಯಾಲಯ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ರೂ.104.00 ಲಕ್ಷಗಳನ್ನು ಸಹಾಯಾನುದಾನವಾಗಿ ನೀಡಲು ಒದಗಿಸಿದೆ.

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರವು ಮೇಲೆ ನಮೂದಿಸಲಾಗಿರುವ ಕಾರ್ಯಕ್ರಮಗಳನ್ನು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಉಚ್ಚ ನ್ಯಾಯಾಲಯದ ಕಾನೂನು ಸೇವಾ ಸಮಿತಿ, ಹಾಗೂ ತಾಲ್ಲೂಕು ಕಾನೂನು ಸೇವಾ ಸಮಿತಿಗಳ ಮೂಲಕ ನಡೆಸಲು, ಕಾನೂನು ಸಾಕ್ಷರತೆ ಮತ್ತು ತಿಳುವಳಿಕೆ ಕಾರ್ಯಕ್ರಮದಡಿ ದೂರದರ್ಶನ, ಆಕಾಶವಾಣಿ ಮತ್ತು ಕಿರುಹೊತ್ತಿಗೆಗಳ ಮುದ್ರಣ ಕಾರ್ಯಕ್ರಮ ಹಮ್ಮಿಕೊಳ್ಳಲು ಹಾಗೂ ರಾಜ್ಯ ಪ್ರಾಧಿಕಾರ ಮತ್ತು ಅಧೀನ ಕಚೇರಿಗಳ ಸಿಬ್ಬಂದಿವರ್ಗದ ವೇತನ ಭತ್ಯೆಗಳಿಗೆ ಹಾಗೂ ಕಚೇರಿ ವೆಚ್ಚಗಳಿಗೆ ಅನುದಾನದ ಅವಶ್ಯಕತೆ ಇ ರುವುದಾಗಿ ಮೇಲೆ ಓದಲಾಗಿರುವ ದಿನಾಂಕ: 24.06.2004ರ ಪತ್ರದಲ್ಲಿ ತಿಳಿಸುತ್ತಾ, 2004-05ನೇ ಸಾಲಿಗೆ ಪ್ರಾಧಿಕಾರಕ್ಕೆ ಒದಗಿಸಿರುವ ಸಹಾಯಾನುದಾನ ರೂ.104.00 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 18 ಎಲ್ಎಡಿ 2004, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2004**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಕರ್ನಾಟಕ ರಾಜ್ಯ ಕಾನೂನು ಪ್ರಾಧಿಕಾರಕ್ಕೆ 2004-05ನೇ ಸಾಲಿನ ಲೆಕ್ಕ ಶೀರ್ಷಿಕೆ ``2235-60-200-5-01-101 ರಡಿಯಲ್ಲಿ ಸಹಾಯಾನುದಾನ ನೀಡಲು ಒದಗಿಸಲಾಗಿರುವ ಅನುದಾನದಿಂದ ರೂ.30.00 ಲಕ್ಷ (ರೂಪಾಯಿ ಮೂವತ್ತು ಲಕ್ಷಗಳು ಮಾತ್ರ) ಮಂಜೂರು ಮಾಡಿದೆ.

1) ಯೋಜಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ಕುರಿತು ವಿವರವಾದ ವರದಿ ನೀಡುವುದು.
2) ಪ್ರಸ್ತುತ ಮಂಜೂರು ಮಾಡಲಾಗಿರುವ ಅನುದಾನಕ್ಕೆ ಉಪಯೋಗಿ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3) ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಯಾವ ಯಾವ ಉಪ ಲೆಕ್ಕ ಶೀರ್ಷಿಕೆಗಳಿಗೆ ಉಪಯೋಗಿಸಲಾಗಿದೆ ಎಂಬುದರ ಬಗ್ಗೆ ಮಾಹಿತಿ.

ಈ ಮೊತ್ತದ ಅನುದಾನ ಬಿಲ್ಲಿಗೆ ಕಾನೂನು ಇ ಲಾಖಾ ಕಾರ್ಯದರ್ಶಿಯವರ ಮೇಲು ರುಜು ಪಡೆಯುವ ಮೂಲಕ ಹಣ ಪಡೆಯಲು ಸೂಚಿಸಿದೆ.

ಈ ಬಗೆಗಿನ ಬಿಲ್ಲು : ಪೇಯಿ ಸ್ವೀಕೃತಿಯ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಎಫ್‌ಆರ್ 2003 ದಿನಾಂಕ: 22.01.04ರ ಅನ್ವಯ ಕ್ರಮ ಜರುಗಿಸುವ ಷರತ್ತಿಗೆ ಒಳಪಟ್ಟಿದೆ.

ಈ ಆದೇಶವನ್ನು ಆರ್ಥಿಕ ಇ ಲಾಖೆಯ ಟಿಪ್ಪಣಿ ಸಂಖ್ಯೆ: ಆಇ 665 ವೆಚ್ಚ-7 04 ದಿನಾಂಕ: 05.08.2004ರಲ್ಲಿ ನೀಡಲಾಗಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್. ಈಶ್ವರ ಪ್ರಸಾದ್**

ಪಿ.ಆರ್. 883

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇ ಲಾಖೆ, (ಆಡಳಿತ-2)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎಸ್. ನಾಯಕ್, ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ನಅಇ 77 ಅಪ್ರಾಸೇ 2000, ದಿನಾಂಕ 26.5.2003.
2. ಸರ್ಕಾರದ ಆದೇಶ ಸಂ.ನಅಇ 77 ಅಪ್ರಾಸೇ 2000, ದಿನಾಂಕ 22.7.2003.
3. ದಿನಾಂಕ 26.12.2003 ರಂದು ವಿಚಾರಣಾಧಿಕಾರಿಗಳ ವರದಿ.
4. ಶ್ರೀ ಹೆಚ್.ಎಸ್. ನಾಯಕ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ರವರ ವರದಿ ದಿನಾಂಕ 26.12.2003.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಆದೇಶದಲ್ಲಿ ಶ್ರೀ ಕೆ.ವಿ. ರಾಮಚಂದ್ರ, ಹಿಂದಿನ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಕೋಲಾರ ಮತ್ತು ಶ್ರೀ ಎಸ್. ಹನುಮಂತಪ್ಪ, ಹಿಂದಿನ ಆಯುಕ್ತರು, ನಗರ ಸಭೆ, ಕೋಲಾರ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಹೆಚ್.ಎಸ್. ನಾಯಕ್, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (4)ರಲ್ಲಿ ಈ ಸಂಬಂಧ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಕೋರಿರುತ್ತಾರೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ನಅಇ 77 ಅಪ್ರಾಸೇ 2000, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎಸ್. ನಾಯಕ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ಇಲಾಖಾ ವಿಚಾರಣೆ ಮಾಡಿ ವಿಚಾರಣಾ ವರದಿ ಸಲ್ಲಿಸಿದ ಕಾರಣ ಒಂದು ಪ್ರಕರಣಕ್ಕೆ 5,000-00 ರೂ.ಗಳಂತೆ ಎರಡು ಪ್ರಕರಣಗಳಿಗೆ ಒಟ್ಟು 10,000-00 ರೂ. (ಹತ್ತು ಸಾವಿರ ರೂ) ಗಳ ಗೌರವ ಧನವನ್ನು, ಒಂದು ಪ್ರಕರಣಕ್ಕೆ 1,000-00 ರೂ.ಗಳಂತೆ ಎರಡು ಪ್ರಕರಣಗಳಿಗೆ ಒಟ್ಟು 2,000-00 ರೂ. (ಎರಡು ಸಾವಿರ ರೂ.) ಗಳ ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಲು ಮಂಜೂರಾತಿ ನೀಡಿದೆ.

ಇಲಾಖಾ ವಿಚಾರಣಾ ಪ್ರಕರಣ ನಗರಾಭಿವೃದ್ಧಿ ಪ್ರಾಧಿಕಾರ, ಕೋಲಾರ ಇವರಿಗೆ ಸಂಬಂಧಿಸಿರುವುದರಿಂದ ಮೇಲೆ ಓದಲಾದ (1)ರ ದಿನಾಂಕ 26.5.2003ರ ಆದೇಶದಲ್ಲಿ ಆದೇಶಿಸಿರುವಂತೆ ಮೇಲೆ ತಿಳಿಸಿರುವ ಸಂಭಾವನೆಯನ್ನು ವಿಚಾರಣಾಧಿಕಾರಿಗಳಿಗೆ ನಗರಾಭಿವೃದ್ಧಿ ಪ್ರಾಧಿಕಾರ, ಕೋಲಾರ ಇವರು ಪಾವತಿ ಮಾಡುವಂತೆ ತಿಳಿಸಿದೆ. ಈ ವೆಚ್ಚವನ್ನು ಸಂಬಂಧಿಸಿದ ಕಛೇರಿ ವೇತನದ ಶೀರ್ಷಿಕೆಯಡಿ ಖರ್ಚು ಹಾಕತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 884

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಲೆಫ್ಟಿನೆಂಟ್ ಕರ್ನಲ್ ಎಂ.ಎಸ್. ಸುರೇಶ್, (ನಿವೃತ್ತ) ಉಪ ನಿರ್ದೇಶಕರು ಹುದ್ದೆಗೆ ರಾಜಿನಾಮೆ ನೀಡಿರುವ ಬಗ್ಗೆ-

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಒಇ 40 ಕಸೈಸೇ 99, ದಿನಾಂಕ: 17.11.2001.
2. ಲೆಫ್ಟಿನೆಂಟ್ ಕರ್ನಲ್ ಸುರೇಶ್, ಉಪ ನಿರ್ದೇಶಕರ ಹುದ್ದೆಗೆ ರಾಜಿನಾಮೆ ನೀಡಿರುವ ಮನವಿ ದಿನಾಂಕ: 7.7.2004.
3. ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ನಿರ್ದೇಶಕರ ಪತ್ರ ಸಂಖ್ಯೆ: ಸೈಕಪುಇ:ಸಿಬ್ಬಂದಿ:ಡಿಡಿ:ಎಂಎಸ್‌ಸು: 2004, ದಿನಾಂಕ: 22.7.2004.

**ಪ್ರಸ್ತಾವನೆ:**

ಲೆಫ್ಟಿನೆಂಟ್ ಕರ್ನಲ್ ಎಂ.ಎಸ್. ಸುರೇಶ್ (ನಿವೃತ್ತಿ) ಇವರನ್ನು ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯಲ್ಲಿ ಹಾಲಿ ಖಾಲಿ ಇರುವ ಉಪ ನಿರ್ದೇಶಕರ ಹುದ್ದೆಗೆ ಎರಡು ವರ್ಷಗಳ ಪರೀಕ್ಷಾರ್ಥಗಳನ್ನಾಗಿ ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಕ ಮಾಡಲಾಗಿತ್ತು. ಸದರಿ ಅಧಿಕಾರಿಗಳ ದಿನಾಂಕ:5.12.2001 ರಲ್ಲಿ ನಿರ್ದೇಶನಾಲಯದಲ್ಲಿ ಕರ್ತವ್ಯಕ್ಕೆ ಹಾಜರಾಗಿ ಸದ್ಯ ಮಡಿಕೇರಿ ಕಾರ್ಯಾಲಯದಲ್ಲಿ ಉಪ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು.

ಮೇಲೆ ಓದಲಾದ ಪತ್ರದಲ್ಲಿ ಸದರಿ ಅಧಿಕಾರಿಯವರು ವೈಯಕ್ತಿಕ ಕಾರಣಗಳಿಂದ ಸ್ವಇಚ್ಛೆ ಮೇರೆಗೆ ರಾಜಿನಾಮೆಯನ್ನು ಸೈನಿಕ ಕಲ್ಯಾಣ ಪುನರ್ವಸತಿ ನಿರ್ದೇಶಕರಿಗೆ ಸಲ್ಲಿಸಿದ್ದು, ಈ ಅರ್ಜಿಯನ್ನು ಅಂಗೀಕರಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 73 ಕಸೈಸೇ 2004, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಲೆಫ್ಟಿನೆಂಟ್ ಕರ್ನಲ್ ಎಂ.ಎಸ್. ಸುರೇಶ್ (ನಿವೃತ್ತ) ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಇವರು ಉಪ ನಿರ್ದೇಶಕರ ಹುದ್ದೆಗೆ ನೀಡಿರುವ ರಾಜಿನಾಮೆಯನ್ನು ಸರ್ಕಾರವು ಅಂಗೀಕರಿಸಿದೆ.

2. ಸದರಿ ಅಧಿಕಾರಿಯಿಂದ ಇಲಾಖೆಗೆ ಏನಾದರೂ ಬಾಕಿ ಇದ್ದಲ್ಲಿ ಅದನ್ನು ಪಾವತಿಸಿಕೊಂಡು ಕರ್ತವ್ಯದಿಂದ ಇವರನ್ನು ಬಿಡುಗಡೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರಾಜು**
ಪಿ.ಆರ್. 885
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಕೆ. ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪಕಾರ್ಯದರ್ಶಿ ಶಿಕ್ಷಣ ಇಲಾಖೆ (ಯೋಜನೆ) ಅವರಿಗೆ ಮೊದಲನೆಯ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಕೆ. ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪಕಾರ್ಯದರ್ಶಿ ಶಿಕ್ಷಣ ಇಲಾಖೆ (ಯೋಜನೆ) ಅವರ ದಿ:19.5.2004ರ ಮನವಿ.
2. ಮಹಾಲೇಖಪಾಲಕರು, (ಎ ಅಂಡ್ ಇ) ಕರ್ನಾಟಕ, ಬೆಂಗಳೂರು ಅವರು ನೀಡಿದ ಪೇ ಸ್ಲಿಪ್ ಸಂಖ್ಯೆ:ಜಿಇ9/ಎ1/03-04/1423-24/ದಿ:2-4-2004.

**ಪ್ರಸ್ತಾವನೆ:**

ಶ್ರೀ ಕೆ. ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ) ಅವರು ಮೇಲೆ (1)ರ ಓದಲಾದ ದಿನಾಂಕ:19.5.2004ರ ಮನವಿಯಲ್ಲಿ ದಿ:1.1.2003ರಂದು ವೇತನಶ್ರೇಣಿ ರೂ.10620-14960ರ ಗರಿಷ್ಟ ಹಂತ ತಲುಪಿದ್ದು, ದಿ:1.1.2004 ರಿಂದ ಅನ್ವಯವಾಗುವಂತೆ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಅವರ ಸೇವಾ ದಾಖಲೆಗಳನ್ನು ಪರಿಶೀಲಿಸಿದ ನಂತರ ಅವರ ಸೇವೆಯು ತೃಪ್ತಿಕರವಾಗಿರುವುದನ್ನು ಮನಗಂಡ ಸರ್ಕಾರವು ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಕ್ರಮಾಂಕ: ಇಡಿ 95 ಡಿಎಆರ್ 2004, ಬೆಂಗಳೂರು, ದಿನಾಂಕ: 10ನೇ ಜುಲೈ 2004**

ಸರ್ಕಾರವು ಶ್ರೀ ಕೆ. ಶ್ರೀಕಂಠೇಶ್ವರ್, ವಿಶೇಷಾಧಿಕಾರಿ ಹಾಗೂ ಸರ್ಕಾರದ ಉಪಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ) ಇವರಿಗೆ ದಿನಾಂಕ:1.1.2004 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.10620-14960ರಲ್ಲಿ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಈ ಮೂಲಕ ಮಂಜೂರು ಮಾಡಿದೆ.

ಅ.ಟಿ.ಸಂಖ್ಯೆ:ಶಿಇ 684 ಐಎಫ್ಎಸ್ 2004 ದಿ:16.6.2004ರಲ್ಲಿ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಸಹಮತಿ ಪಡೆದು ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಪಿ.ಆರ್. 886
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1)

**ಕಾನೂನು ಸಚಿವಾಲಯ**

**ಸೇರ್ಪಡೆ ಆದೇಶ ಸಂಖ್ಯೆ:ಲಾ 107 ಎಲ್‌ಸಿಇ 2003, ಬೆಂಗಳೂರು, ದಿನಾಂಕ: 19ನೇ ಮೇ 2004**

ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಸಿಇ 2003 ದಿನಾಂಕ 23-12-2003ರ ಆದೇಶ ಭಾಗದ ಪುಟ-3ರ ಕ್ರಮ ಸಂಖ್ಯೆ 1 ರಲ್ಲಿನ ಪ್ರತಿ ನ್ಯಾಯಾಲಯಕ್ಕೆ 7 ಹುದ್ದೆಗಳು ಎಂದು ನಮೂದಿಸಿದ್ದು, ಈ ಕೆಳಕಂಡ ಹುದ್ದೆಗಳ ಹೆಸರನ್ನು ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

**ದಾವಣಗೆರೆ 1ನೇ ಮತ್ತು 2ನೇ ಅಪರ ಜಿಲ್ಲಾ ನ್ಯಾಯಾಧೀಶರ ನ್ಯಾಯಾಲಯಗಳು:**

| | ಹುದ್ದೆಯ ಹೆಸರು | 1ನೇ ಅಪರ ಜಿಲ್ಲಾ ನ್ಯಾಯಾಲಯ | 2ನೇ ಅಪರ ಜಿಲ್ಲಾ ನ್ಯಾಯಾಲಯ |
|---|---|---|---|
| 1) | ಜಿಲ್ಲಾ ನ್ಯಾಯಾಧೀಶರು | 1 | 1 |
| 2) | ತೀರ್ಪುಬರಹಗಾರರು | 1 | 1 |
| 3) | ಪ್ರಥಮ ದರ್ಜೆ ಸಹಾಯಕ | 1 | 1 |
| 4) | ಬೆರಳಚ್ಚುಗಾರ | 1 | 1 |
| 5) | ಅಟೆಂಡರ್ | 1 | 1 |
| 6) | ಪ್ಯೂನ್ಸ್ | 2 | 2 |
| | ಒಟ್ಟು | 7 | 7 |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014 ನ್ಯಾಯಪರಿಪಾಲನೆ-00-105 ವ್ಯವಹಾರ ಮತ್ತು ಸತ್ರ ನ್ಯಾಯಾಲಯಗಳು-0-01 ಸಿಬ್ಬಂದಿ ವೆಚ್ಚ-125 ಆಧುನೀಕರಣ ಯೋಜನೇತರ" ಇದರ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಪಿ. ರಾಮಕೃಷ್ಣ**
ಪಿ.ಆರ್. 888
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಾನೂನು ಇಲಾಖೆ (ಆಡಳಿತ-1)